# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | | 1488 (1677) |
| ಸದಸ್ಯರ ಹೆಸರು | | ಶ್ರೀ ಶಶೀಲ್ ಜಿ. ನಮೋಶಿ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | | 14.03.2022 |
| ಉತ್ತರಿಸಬೇಕಾದವರು | | ಉನ್ನತ ಶಿಕ್ಷಣ ಸಚಿವರು |
| ಪ್ರಶ್ನೆ | | ಉತ್ತರ |
| (ಅ) | ಸರ್ಕಾರಿ ಪದವಿ ಕಾಲೇಜುಗಳಲ್ಲಿ ದೀರ್ಘ ಕಾಲದಿಂದ ಕಾರ್ಯನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರಿಗೆ ಬೋಧನಾ ಅವಧಿ ಹೆಚ್ಚಿಸಿ ವೇತನ ಪರಿಷ್ಕರಣೆ ಮಾಡಿ ವಾರ್ಷಿಕ 10 ತಿಂಗಳು ವೇತನ ನೀಡುವಂತೆ ಇತೀಚೆಗೆ ಸರ್ಕಾರ ಆದೇಶ ಹೊರಡಿಸಿದೆಯೇ; (ಹೊರಡಿಸಿದ್ದಲ್ಲಿ, ಅದರ ಪ್ರತಿಯನ್ನು ಒದಗಿಸುವುದು) | ಹೌದು<br><br>ಸರ್ಕಾರದ ಆದೇಶ ಸಂಖ್ಯೆ: ಇಡಿ 242 ಡಿಸಿಇ 2021, ದಿನಾಂಕ:14.01.2022 & ತಿದ್ದುಪಡಿ ಆದೇಶ ದಿನಾಂಕ: 24.01.2022 ರಲ್ಲಿ ಸರ್ಕಾರಿ ಪದವಿ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರಿಗೆ ಬೋಧನಾ ಅವಧಿ ಹೆಚ್ಚಿಸಿ, ವೇತನ ಪರಿಷ್ಕರಣೆ ಮಾಡಿ, ಸೆಮಿಸ್ಟರ್ ಅವಧಿಗೆ ಬದಲಾಗಿ ಶೈಕ್ಷಣಿಕ ವರ್ಷಕ್ಕೆ (10 ತಿಂಗಳಿಗೆ) ನೇಮಕ ಮಾಡಿಕೊಳ್ಳಲು ಆದೇಶಿಸಲಾಗಿದೆ. (ಅನುಬಂಧ – 1 ರಲ್ಲಿ ಒದಗಿಸಿದೆ). |
| (ಆ) | ಸರ್ಕಾರದ ಈ ನಿರ್ಧಾರದಂತೆ ಅತಿಥಿ ಉಪನ್ಯಾಸಕರನ್ನು ನೇಮಕ ಮಾಡುವಲ್ಲಿ ಅನುಸರಿಸುತ್ತಿರುವ ಮಾನದಂಡಗಳೇನು; (ವಿವರ ನೀಡುವುದು) | 2021-22ನೇ ಶೈಕ್ಷಣಿಕ ಸಾಲಿನಲ್ಲಿ ಸರ್ಕಾರದ ಆದೇಶ ಸಂಖ್ಯೆ: ಇಡಿ 242 ಡಿಸಿಇ 2021, ದಿನಾಂಕ:14.01.2022 & ತಿದ್ದುಪಡಿ ಆದೇಶ ದಿನಾಂಕ: 24.01.2022 ರಲ್ಲಿ ಸರ್ಕಾರಿ ಪದವಿ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರಿಗೆ ಬೋಧನಾ ಅವಧಿಯನ್ನು ಈ ಹಿಂದೆ ಇದ್ದ ವಾರಕ್ಕೆ ಗರಿಷ್ಠ ಕಲಾ ಮತ್ತು ವಾಣಿಜ್ಯ ವಿಭಾಗಕ್ಕೆ 8 ಮತ್ತು ವಿಜ್ಞಾನ ವಿಭಾಗಕ್ಕೆ 10 ಗಂಟೆಗಳ ಬದಲಾಗಿ ವಾರಕ್ಕೆ ಗರಿಷ್ಠ ಕಲಾ ಮತ್ತು ವಾಣಿಜ್ಯ ವಿಭಾಗಕ್ಕೆ 15 ಮತ್ತು ವಿಜ್ಞಾನ ವಿಭಾಗಕ್ಕೆ 19 ಗಂಟೆಗಳಿಗೆ ಹೆಚ್ಚಿಸಿ, ಅತಿಥಿ ಉಪನ್ಯಾಸಕರಾಗಿ ಹೆಚ್ಚಿನ ಅವಧಿ ಸೇವೆ ಸಲ್ಲಿಸಿದವರಿಗೆ ಅತಿಥಿ ಉಪನ್ಯಾಸಕರ ನೇಮಕಾತಿಯಲ್ಲಿ ಪ್ರಾಧಾನ್ಯತೆ ನೀಡುವಂತೆ ಆದೇಶಿಸಲಾಗಿರುತ್ತದೆ.<br>ಅದರನ್ವಯ ಅತಿಥಿ ಉಪನ್ಯಾಸಕರ ಆಯ್ಕೆಗೆ ಸಂಬಂಧಿಸಿದಂತೆ ಈ ಹಿಂದೆ ಸರ್ಕಾರಿ ಪದವಿ ಕಾಲೇಜುಗಳಲ್ಲಿ ಸಲ್ಲಿಸಿರುವ ಸೇವಾ ಅನುಭವ ಹಾಗೂ ವಿದ್ಯಾರ್ಹತೆಯನ್ನು ಆಧರಿಸಿ, ಈ ಕೆಳಕಂಡಂತೆ 100 ಅಂಕಗಳಿಗೆ ಮಾನದಂಡಗಳನ್ನು ನಿಗಧಿಪಡಿಸಲಾಗಿದೆ. |

| ಕ್ರ. ಸಂ. | ವಿದ್ಯಾರ್ಹತೆ | ಗರಿಷ್ಠ ಅಂಕಗಳು |
|---|---|---|
| 1. | ವಿದ್ಯಾರ್ಹತೆ:<br>ಅಭ್ಯರ್ಥಿಯು ಎರಡು ವರ್ಷ ಸ್ನಾತಕೋತ್ತರ ಪದವಿಯಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳ 25%ನ್ನು ಗಣನೆಗೆ ತೆಗೆದುಕೊಳ್ಳುವುದು.<br>(ಉದಾ: ಅಭ್ಯರ್ಥಿಯು ಸ್ನಾತಕೋತ್ತರ ಪದವಿಯಲ್ಲಿ ಶೇಕಡ 60 ಅಂಕ ಪಡೆದಿದ್ದಲ್ಲಿ ಅದರ ಶೇಕಡ 25ರಷ್ಟು ಭಾಗವನ್ನು ಅಂದರೆ 15 ಅಂಕಗಳು ಎಂಬುದಾಗಿ ಗಣನೆಗೆ ತೆಗೆದುಕೊಳ್ಳುವುದು). | 25 |
| 2. | ಹೆಚ್ಚುವರಿ ವಿದ್ಯಾರ್ಹತೆ:<br>1) ಪಿಹೆಚ್.ಡಿ ವಿದ್ಯಾರ್ಹತೆ ಪಡೆದಿದ್ದಲ್ಲಿ<br>2) ಎನ್ಇಟಿ/ಕೆ-ಸೆಟ್/ಎಸ್ಎಲ್ಇಟಿ ವಿದ್ಯಾರ್ಹತೆ ಪಡೆದಿದ್ದಲ್ಲಿ<br>3) ಎಂ.ಫಿಲ್. ವಿದ್ಯಾರ್ಹತೆ ಪಡೆದಿದ್ದಲ್ಲಿ | 12<br>09<br>06 |
| 3. | ಅನುಭವ:<br>ಹಿಂದಿನ ವರ್ಷಗಳಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಮಾತ್ರ ಅತಿಥಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ ಅವಧಿಗೆ ಪ್ರತಿ ಶೈಕ್ಷಣಿಕ ವರ್ಷಕ್ಕೆ 3 ಅಂಕಗಳಂತೆ ಗರಿಷ್ಠ 16 ವರ್ಷಗಳಿಗೆ 48 ಅಂಕಗಳನ್ನು ಮಿತಿಗೊಳಿಸುವುದು. (ಪ್ರತಿ ಶೈಕ್ಷಣಿಕ ವರ್ಷದ ಪೂರ್ಣ ಅವಧಿ ಸೇವೆಗೆ 3 ಅಂಕಗಳು, ಶೈಕ್ಷಣಿಕ ವರ್ಷದಲ್ಲಿ 1 ಸೆಮಿಸ್ಟರ್ ನಲ್ಲಿ ಮಾತ್ರ ಸೇವೆ ಸಲ್ಲಿಸಿದ್ದರೆ 1.5 ಅಂಕಗಳು) | 48 |
| | ಒಟ್ಟು | 100 |

| | | |
|---|---|---|
| | | ಸೂಚನೆ: ವಿಕಲಚೇತನ ಅಭ್ಯರ್ಥಿಗಳಿಗೆ 10 ಅಂಕಗಳನ್ನು ಹೆಚ್ಚುವರಿಯಾಗಿ ನೀಡುವುದು. |
| (ಇ) | ಸರ್ಕಾರದ 15 ಗಂಟೆಗಳ ಭೋದನಾ ಅವಧಿಗೆ ಎಷ್ಟು ಮಂದಿ ಅತಿಥಿ ಉಪನ್ಯಾಸಕರನ್ನು ನೇಮಕ ಮಾಡಿಕೊಳ್ಳಲಾಗಿದೆ; (ವಿಷಯವಾರು ಮಾಹಿತಿ ನೀಡುವುದು) | ಹೆಚ್ಚುವರಿ ಬೋಧನಾ ಕಾರ್ಯಭಾರಕ್ಕನುಗುಣವಾಗಿ ಕಲಾ ಮತ್ತು ವಾಣಿಜ್ಯ ವಿಭಾಗಕ್ಕೆ 15 ಮತ್ತು ವಿಜ್ಞಾನ ವಿಭಾಗಕ್ಕೆ 19 ಗಂಟೆಗಳಿಗೆ ಒಟ್ಟು 6782 ಅತಿಥಿ ಉಪನ್ಯಾಸಕರನ್ನು ನೇಮಕ ಮಾಡಿಕೊಳ್ಳಲಾಗಿದೆ. (ಅನುಬಂಧ -2 ರಲ್ಲಿ ಒದಗಿಸಿದೆ) |
| (ಈ) | 15 ಗಂಟೆಗಳ ಬೋಧನಾ ಅವಧಿ ಮಾಡುವವರು ಯು.ಜಿ.ಸಿ. ಶಿಕ್ಷಕರ ವಿದ್ಯಾರ್ಹತೆಯನ್ನು ಹೊಂದಿರುತ್ತಾರೆಯೇ; | ಹೌದು,<br>ಕಲಾ ಮತ್ತು ವಾಣಿಜ್ಯ ವಿಭಾಗಕ್ಕೆ 15 ಮತ್ತು ವಿಜ್ಞಾನ ವಿಭಾಗಕ್ಕೆ 19 ಗಂಟೆಗಳ ಬೋಧನಾ ಅವಧಿಗೆ ನೇಮಕಗೊಂಡವರಲ್ಲಿ ಒಟ್ಟು 3228 ಅತಿಥಿ ಉಪನ್ಯಾಸಕರು ಯು.ಜಿ.ಸಿ. ವಿದ್ಯಾರ್ಹತೆಯನ್ನು ಹೊಂದಿರುತ್ತಾರೆ. |
| (ಉ) | ರಾಜ್ಯದಲ್ಲಿರುವ ಸುಮಾರು 14500 ಉಪನ್ಯಾಸಕರಿಗೂ ಸದರಿ ನೇಮಕಾತಿಯಲ್ಲಿ ಅವಕಾಶ ಕಲ್ಪಿಸಲಾಗಿದೆಯೇ? | ಸರ್ಕಾರದ ಆದೇಶ ಸಂಖ್ಯೆ: ಇಡಿ 242 ಡಿಸಿಇ 2021, ದಿನಾಂಕ:14.01.2022 & ತಿದ್ದುಪಡಿ ಆದೇಶ ದಿನಾಂಕ: 24.01.2022 ರಲ್ಲಿ ಸರ್ಕಾರಿ ಪದವಿ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರಿಗೆ ಬೋಧನಾ ಅವಧಿಯನ್ನು ಈ ಹಿಂದೆ ವಾರಕ್ಕೆ ಗರಿಷ್ಠ ಕಲಾ ಮತ್ತು ವಾಣಿಜ್ಯ ವಿಭಾಗಕ್ಕೆ 8 ಮತ್ತು ವಿಜ್ಞಾನ ವಿಭಾಗಕ್ಕೆ 10 ಗಂಟೆಗಳ ಬದಲಾಗಿ ವಾರಕ್ಕೆ ಗರಿಷ್ಠ ಕಲಾ ಮತ್ತು ವಾಣಿಜ್ಯ ವಿಭಾಗಕ್ಕೆ 15 ಮತ್ತು ವಿಜ್ಞಾನ ವಿಭಾಗಕ್ಕೆ 19 ಗಂಟೆಗಳಿಗೆ ಹೆಚ್ಚಿಸಲಾಗಿರುತ್ತದೆ. ಅದರನ್ವಯ, ಕಾಲೇಜುಗಳಲ್ಲಿ ವಿವಿಧ ವಿಷಯಗಳಲ್ಲಿ ಖಾಯಂ ಅಧ್ಯಾಪಕರುಗಳಿಗೆ ಹಂಚಿಕೆ ಮಾಡಿ ಉಳಿದ ಕಾರ್ಯಭಾರನ್ನು ನಿರ್ವಹಿಸಲು, ಗರಿಷ್ಠ ಕಲಾ ಮತ್ತು ವಾಣಿಜ್ಯ ವಿಭಾಗಕ್ಕೆ 15 ಮತ್ತು ವಿಜ್ಞಾನ ವಿಭಾಗಕ್ಕೆ 19 ಗಂಟೆಗಳ ಕಾರ್ಯಭಾರ ಹಾಗೂ ಭಾಗಶಃ ಉಳಿಕೆ ಕಾರ್ಯಭಾರದ ಆಧಾರದ ಮೇಲೆ ಲಭ್ಯವಾಗಿರುವ ಕಾರ್ಯಭಾರಕ್ಕೆ ಅಗತ್ಯವಿರುವ ಅಂದಾಜು 10,500 ಅತಿಥಿ ಉಪನ್ಯಾಸಕರನ್ನು ಯು.ಜಿ.ಸಿ. ವಿದ್ಯಾರ್ಹತೆ ಹಾಗೂ ಈ ಹಿಂದೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಅತಿಥಿ ಉಪನ್ಯಾಸಕರಾಗಿ ಸೇವಾ ಅನುಭವ ಹೊಂದಿರುವವರನ್ನು ನೇಮಿಸಿಕೊಳ್ಳಲು ಕ್ರಮವಹಿಸಲಾಗಿದೆ.<br>ಅದರನ್ವಯ ಅತಿಥಿ ಉಪನ್ಯಾಸಕರ ಆಯ್ಕೆಗೆ ಏಕರೂಪವಾಗಿ ನಡೆಸಲಾದ ಮೂರು ಸುತ್ತಿನ ಆನ್‌ಲೈನ್ ಕೌನ್ಸಿಲಿಂಗ್ ನಂತರ ದಿನಾಂಕ: 14.03.2022 ರಲ್ಲಿದ್ದಂತೆ, 9082 ಅತಿಥಿ ಉಪನ್ಯಾಸಕರು ಆಯ್ಕೆ ಮಾಡಿಕೊಂಡ ಕಾಲೇಜುಗಳಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.<br>ಉಳಿದಂತೆ ಕಾಲೇಜುಗಳಲ್ಲಿ ಇನ್ನೂ ಲಭ್ಯವಿರುವ/ ಉಳಿಕೆಯಾಗಿರುವ ಕಾರ್ಯಭಾರಕ್ಕೆ ಅಗತ್ಯವಿರುವ ಅತಿಥಿ ಉಪನ್ಯಾಸಕರನ್ನು ಆಯ್ಕೆ ಮಾಡಿಕೊಳ್ಳಲು ಆನ್‌ಲೈನ್ ಕೌನ್ಸಲಿಂಗ್ ಪ್ರಕ್ರಿಯೆ ಮುಂದುವರೆಸಲಾಗಿದೆ. |

**ಇಡಿ 84 ಡಿಸಿಇ 2022**

**(ಡಾ. ಅಶ್ವಥ್ ನಾರಾಯಣ ಸಿ.ಎನ್.)**
**ಉನ್ನತ ಶಿಕ್ಷಣ, ಐ.ಟಿ.-ಬಿ.ಟಿ.ವಿಜ್ಞಾನ ಮತ್ತು ತಂತ್ರಜ್ಞಾನ, ವಿದ್ಯುನ್ಮಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು**

ಉನ್ನತ ಶಿಕ್ಷಣ ತಾಂತ್ರಿಕ ಶಿಕ್ಷಣ ...
1084
17 JAN 2022
C



ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ :** ಕಾಲೇಜು ಮತ್ತು ತಾಂತ್ರಿಕ ಶಿಕ್ಷಣ ಇಲಾಖಾ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರುಗಳ ವೇತನ ಹೆಚ್ಚಳ ಹಾಗೂ ಇತರೆ ಬೇಡಿಕೆಗಳ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಇಡಿ 66 ಡಿಸಿಇ 2017, ದಿನಾಂಕ: 04.04.2017
2) ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 242 ಡಿಸಿಇ 2021, ದಿನಾಂಕ: 15.12.2021.
3) ತ್ರಿಸದಸ್ಯ ಸಮಿತಿಯ ವರದಿ ದಿನಾಂಕ: 12.01.2022



---

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿನ ಸರ್ಕಾರದ ಆದೇಶದಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಹೆಚ್ಚುವರಿ ಬೋಧನಾ ಕಾರ್ಯಭಾರಕ್ಕೆ ಅನುಗುಣವಾಗಿ ಕಾರ್ಯನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರಲ್ಲಿ ಸ್ನಾತಕೋತ್ತರ ಪದವಿ ಪರೀಕ್ಷೆಯಲ್ಲಿ ಕನಿಷ್ಠ ಶೇಕಡ 55 ರಷ್ಟು ಅಂಕಗಳನ್ನು ಪಡೆದು, ಎನ್.ಇ..ಟಿ., ಎಸ್.ಎಲ್.ಇ.ಟಿ. ಅಥವಾ ಪಿ.ಹೆಚ್.ಡಿ. ಮಾಡಿಕೊಂಡಿರುವ ಅತಿಥಿ ಉಪನ್ಯಾಸಕರಿಗೆ ಮಾಸಿಕ ಗೌರವಧನವನ್ನು ರೂ.11,500/- ರಿಂದ ರೂ.13,000/-ಗಳಿಗೆ ಹಾಗೂ ಸ್ನಾತಕೋತ್ತರ ಪದವಿ ಪರೀಕ್ಷೆಯಲ್ಲಿ ಕನಿಷ್ಠ ಶೇಕಡ 55 ರಷ್ಟು ಅಂಕಗಳನ್ನು ಪಡೆದ ಅತಿಥಿ ಉಪನ್ಯಾಸಕರಿಗೆ ಮಾಸಿಕ ಗೌರವಧನವನ್ನು ರೂ. 9,500/- ರಿಂದ ರೂ. 11,000/-ಕ್ಕೆ ಹೆಚ್ಚಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಅಧಿಸೂಚನೆಯಲ್ಲಿ ಕಾಲೇಜು ಮತ್ತು ತಾಂತ್ರಿಕ ಶಿಕ್ಷಣ ಇಲಾಖಾ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರುಗಳ ಗೌರವಧನ ಹೆಚ್ಚಳ ಹಾಗೂ ಇತರ ಬೇಡಿಕೆಗಳಿಗೆ ಸಂಬಂಧಿಸಿದಂತೆ, ವಿವರವಾದ ಅಧ್ಯಯನ ನಡೆಸಿ, ವಿಸ್ತೃತ ವರದಿಯನ್ನು ಸಲ್ಲಿಸುವಂತೆ, ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ, ಸರ್ಕಾರ ಕಾರ್ಯದರ್ಶಿ, ಆರ್ಥಿಕ ಇಲಾಖೆ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಾನೂನು ಇಲಾಖೆ ಹಾಗೂ ಸದಸ್ಯ ಕಾರ್ಯದರ್ಶಿಯನ್ನಾಗಿ ಆಯುಕ್ತರು, ಕಾಲೇಜು ಮತ್ತು ತಾಂತ್ರಿಕ ಶಿಕ್ಷಣ ಇಲಾಖೆ ಇವರುಗಳನ್ನೊಳಗೊಂಡಂತೆ ಸಮಿತಿಯನ್ನು ರಚಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ಸಮಿತಿಯು ವಿವರವಾದ ಅಧ್ಯಯನ ನಡೆಸಿ, ಅತಿಥಿ ಉಪನ್ಯಾಸಕರ ವಿವಿಧ ಬೇಡಿಕೆಗಳನ್ನು ಕಾನೂನಾತ್ಮಕವಾಗಿ, ಆಡಳಿತಾತ್ಮಕವಾಗಿ ಮತ್ತು ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿ ಪರಿಶೀಲಿಸಿ, ವಿಸ್ತೃತ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸಮಿತಿಯು ಸಲ್ಲಿಸಿದ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ವರದಿಯನ್ನು ಅಂಗೀಕರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 242 ಡಿಸಿಇ 2021, ಬೆಂಗಳೂರು**
**ದಿನಾಂಕ: 14ನೇ ಜನವರಿ 2022**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಕಾಲೇಜು ಶಿಕ್ಷಣ ಇಲಾಖಾ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರುಗಳ ಬೇಡಿಕೆಗಳ ಕುರಿತು ಸಮಿತಿಯ ಶಿಫಾರಸ್ಸಿನಂತೆ, ಈ ಕೆಳಕಂಡಂತೆ ಆದೇಶಿಸಿದೆ.

1. ಅತಿಥಿ ಉಪನ್ಯಾಸಕರಿಗೆ ಪ್ರಸ್ತುತ ನೀಡಲಾಗುತ್ತಿರುವ ಗರಿಷ್ಠ 8/10 ಗಂಟೆಗಳ ಕಾರ್ಯಭಾರಕ್ಕೆ ಬದಲಾಗಿ, ಗರಿಷ್ಠ 15 ಗಂಟೆಗಳ ಕಾರ್ಯಭಾರವನ್ನು ನೀಡಿ, ಕೆಳಗಿನಂತೆ ಗೌರವಧನವನ್ನು ಹೆಚ್ಚಿಸುವುದು.
    - ಅ) 5 ವರ್ಷ ಮತ್ತು ಅದಕ್ಕಿಂತ ಹೆಚ್ಚಿನ ಅವಧಿಗೆ ಅತಿಥಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ ಮತ್ತು ಯು.ಜಿ.ಸಿ. ನಿಗಧಿಪಡಿಸಿದ ವಿದ್ಯಾರ್ಹತೆ ಹೊಂದಿರುವವರಿಗೆ ರೂ.32,000/- (ಮೂವತ್ತೆರಡು ಸಾವಿರ ರೂಪಾಯಿಗಳು ಮಾತ್ರ)
    - ಆ) 5 ವರ್ಷಕ್ಕಿಂತ ಕಡಿಮೆ ಅವಧಿಗೆ ಅತಿಥಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ ಮತ್ತು ಯು.ಜಿ.ಸಿ. ನಿಗಧಿಪಡಿಸಿದ ವಿದ್ಯಾರ್ಹತೆ ಹೊಂದಿರುವವರಿಗೆ ರೂ.30,000/-(ಮೂವತ್ತು ಸಾವಿರ ರೂಪಾಯಿಗಳು ಮಾತ್ರ)
    - ಇ) 5 ವರ್ಷ ಮತ್ತು ಅದಕ್ಕಿಂತ ಹೆಚ್ಚಿನ ಅವಧಿಗೆ ಅತಿಥಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ ಮತ್ತು ಯು.ಜಿ.ಸಿ. ನಿಗಧಿಪಡಿಸಿದ ವಿದ್ಯಾರ್ಹತೆ ಹೊಂದಿಲ್ಲದವರಿಗೆ ರೂ. 28,000/- (ಇಪ್ಪತ್ತೆಂಟು ಸಾವಿರ ರೂಪಾಯಿಗಳು ಮಾತ್ರ)
    - ಈ) 5 ವರ್ಷಕ್ಕಿಂತ ಕಡಿಮೆ ಅವಧಿಗೆ ಅತಿಥಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ ಮತ್ತು ಯು.ಜಿ.ಸಿ. ನಿಗಧಿಪಡಿಸಿದ ವಿದ್ಯಾರ್ಹತೆ ಹೊಂದಿಲ್ಲದವರಿಗೆ ರೂ. 26,000/- (ಇಪ್ಪತ್ತಾರು ಸಾವಿರ ರೂಪಾಯಿಗಳು ಮಾತ್ರ)
2. ಅತಿಥಿ ಉಪನ್ಯಾಸಕರನ್ನು ಸೆಮಿಸ್ಟರ್‌ಗೆ ಬದಲಾಗಿ ಶೈಕ್ಷಣಿಕ ವರ್ಷಕ್ಕೆ (10 ತಿಂಗಳಿಗೆ) ನೇಮಕ ಮಾಡುವುದು.
3. ಅತಿಥಿ ಉಪನ್ಯಾಸಕರ ಗೌರವಧನವನ್ನು ಪ್ರತಿ ತಿಂಗಳು 10ನೇ ತಾರೀಖಿನ ಒಳಗೆ ಪಾವತಿ ಮಾಡುವುದು.
4. ಅತಿಥಿ ಉಪನ್ಯಾಸಕರಾಗಿ ಹೆಚ್ಚಿನ ಅವಧಿಗೆ ಸೇವೆ ಸಲ್ಲಿಸಿದವರಿಗೆ ಅತಿಥಿ ಉಪನ್ಯಾಸಕರ ನೇಮಕಾತಿಯಲ್ಲಿ ಪ್ರಾಧಾನ್ಯತೆ ಕೊಡುವುದು. ಇದಕ್ಕೆ ಸಂಬಂಧಪಟ್ಟ ಹಾಗೆ ಪ್ರಸ್ತುತ ಇಲಾಖೆಯಲ್ಲಿ ಅನುಸರಿಸುತ್ತಿರುವ ಮಾನದಂಡಗಳನ್ವಯ ಆಯ್ಕೆಪಟ್ಟಿ ತಯಾರಿಸುವುದು.

5. ಅತಿಥಿ ಉಪನ್ಯಾಸಕರಿಗೆ ಸಂಬಂಧಪಟ್ಟ ಕಾಲೇಜಿನಲ್ಲಿ ಗರಿಷ್ಠ 15 ಗಂಟೆಗಳ ಕಾರ್ಯಭಾರ ಲಭ್ಯವಿಲ್ಲದಿದ್ದರೆ, ಅಂತಹ ಅತಿಥಿ ಉಪನ್ಯಾಸಕರಿಗೆ ಕಾರ್ಯಭಾರವಿರುವ ಇತರೆ ಸರ್ಕಾರಿ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸಲು ಸೂಚಿಸುವುದು. ಇದರ ಹೊರತಾಗಿಯೂ 15 ಗಂಟೆಗಳಿಗಿಂತ ಕಡಿಮೆ ಕಾರ್ಯಭಾರವಿದ್ದಲ್ಲಿ, ಎಷ್ಟು ಗಂಟೆಗಳ ಕಾರ್ಯಭಾರ ಉಪಲಬ್ಧವಿದೆಯೋ ಅದಕ್ಕೆ ಅನುಗುಣವಾಗಿ ಗೌರವಧನ ನೀಡುವುದು.

6. ಯು.ಜಿ.ಸಿ. ನಿಗಧಿಪಡಿಸಿದ ವಿದ್ಯಾರ್ಹತೆ ಹೊಂದಿಲ್ಲದ ಅತಿಥಿ ಉಪನ್ಯಾಸಕರಿಗೆ ನಿಗಧಿತ ವಿದ್ಯಾರ್ಹತೆಯನ್ನು ಹೊಂದಲು 3 ವರ್ಷಗಳ ಕಾಲಾವಧಿ ನೀಡುವುದು. 3 ವರ್ಷಗಳ ನಂತರ ಯು.ಜಿ.ಸಿ. ನಿಗಧಿಪಡಿಸಿದ ವಿದ್ಯಾರ್ಹತೆ ಹೊಂದಿಲ್ಲದ ಅತಿಥಿ ಉಪನ್ಯಾಸಕರ ನೇಮಕಾತಿಯನ್ನು ಸಂಪೂರ್ಣವಾಗಿ ನಿರ್ಬಂಧಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

Rajyashree.V.T
(ವಿ.ಟಿ. ರಾಜ್ಯಶ್ರೀ) 14-1-2022
ಸರ್ಕಾರದ ಉಪ ಕಾರ್ಯದರ್ಶಿ,
ಉನ್ನತ ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ)

**ಇವರಿಗೆ:**

1. ಮಹಾಲೇಖಪಾಲರು (ಲೆಕ್ಕಪತ್ರ / ಲೆಕ್ಕಪರಿಶೋಧನೆ), ಕರ್ನಾಟಕ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಆರ್ಥಿಕ ಇಲಾಖೆ, ವಿಧಾನ ಸೌಧ, ಬೆಂಗಳೂರು.
3. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಾನೂನು ಇಲಾಖೆ, ವಿಧಾನ ಸೌಧ, ಬೆಂಗಳೂರು.
4. ಆಯುಕ್ತರು, ಕಾಲೇಜು ಮತ್ತು ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು.
5. ಸಂಬಂಧಪಟ್ಟ ಜಂಟಿ ಪ್ರಾದೇಶಿಕ ನಿರ್ದೇಶಕರುಗಳಿಗೆ/ ಎಲ್ಲಾ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿಗೆ (ಆಯುಕ್ತಾಲಯದ ಮುಖಾಂತರ)
6. ಶಾಖಾ ರಕ್ಷ ಕಡತಾ/ ಹೆಚ್ಚುವರಿ ಕಡತ.

**ಪ್ರತಿ** :

1. ಸನ್ಮಾನ್ಯ ಮುಖ್ಯಮಂತ್ರಿಗಳ ಆಪ್ತ ಕಾರ್ಯದರ್ಶಿಯವರ ಆಪ್ತ ಶಾಖೆ, ವಿಧಾನ ಸೌಧ.
2. ಮಾನ್ಯ ವಿಧಾನ ಪರಿಷತ್ತಿನ ಸಭಾಪತಿಯವರ ಆಪ್ತ ಕಾರ್ಯದರ್ಶಿ, ವಿಧಾನಸೌಧ,
3. ಮಾನ್ಯ ಉನ್ನತ ಶಿಕ್ಷಣ ಸಚಿವರ ಆಪ್ತ ಕಾರ್ಯದರ್ಶಿ, ವಿಕಾಸ ಸೌಧ,
4. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ.



ಕರ್ನಾಟಕ ಸರ್ಕಾರ

ಸಂಖ್ಯೆ: ಇಡಿ 242 ಡಿಸಿಇ 2021(ಇ)

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:24.01.2022.

## ತಿದ್ದುಪಡಿ ಆದೇಶ

ಸರ್ಕಾರದ ಆದೇಶ ಸಂಖ್ಯೆ: ಇಡಿ 242 ಡಿಸಿಇ 2021, ದಿನಾಂಕ: 14.01.2022 ರ ಆದೇಶ ಭಾಗದಲ್ಲಿನ ಕ್ರಮ ಸಂಖ್ಯೆ: 01 ರಲ್ಲಿ ನಮೂದಿಸಿರುವ **"ಅತಿಥಿ ಉಪನ್ಯಾಸಕರಿಗೆ ಪ್ರಸ್ತುತ ನೀಡಲಾಗುತ್ತಿರುವ ಗರಿಷ್ಠ 8/10 ಗಂಟೆಗಳ ಕಾರ್ಯಭಾರಕ್ಕೆ ಬದಲಾಗಿ ಗರಿಷ್ಠ 15 ಗಂಟೆಗಳ ಕಾರ್ಯಭಾರವನ್ನು ನೀಡಿ"** ಎಂಬುದನ್ನು ಈ ಕೆಳಕಂಡಂತೆ ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

"ಅತಿಥಿ ಉಪನ್ಯಾಸಕರಿಗೆ ಪ್ರಸ್ತುತ ನೀಡಲಾಗುತ್ತಿರುವ ಕಲಾ/ವಾಣಿಜ್ಯ ವಿಷಯಗಳಿಗೆ ಗರಿಷ್ಠ 8 ಗಂಟೆ ಹಾಗೂ ವಿಜ್ಞಾನ ವಿಷಯಗಳು /ಪ್ರಾಯೋಗಿಕ ತರಗತಿಗಳಿಗೆ ಗರಿಷ್ಠ 10 ಗಂಟೆಗಳ **ಬದಲಾಗಿ**, ಕಲಾ/ವಾಣಿಜ್ಯ ವಿಷಯಗಳಿಗೆ ಗರಿಷ್ಠ 15 ಗಂಟೆ ಹಾಗೂ ವಿಜ್ಞಾನ ವಿಷಯಗಳು /ಪ್ರಾಯೋಗಿಕ ತರಗತಿಗಳಿಗೆ ಗರಿಷ್ಠ 19 ಗಂಟೆಗಳ ಕಾರ್ಯಭಾರವನ್ನು ನೀಡಿ"




ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

ಸವಿತ ಎಂ.ಟಿ. 24/01/2022
**(ಸವಿತ ಎಂ.ಟಿ.)**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಉನ್ನತ ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ)

ಇವರಿಗೆ:-

1. ಪ್ರಧಾನ ಮಹಾಲೇಖಪಾಲರು, ಕರ್ನಾಟಕ (ಎ ಮತ್ತು ಇ), (ಎ ಮತ್ತು ಎಸ್.ಎಸ್.ಎ) ಮತ್ತು (ಇ ಮತ್ತು ಆರ್.ಎಸ್.ಎ.) ಬೆಂಗಳೂರು.
2. ಆಯುಕ್ತರು, ಕಾಲೇಜು ಮತ್ತು ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು.
3. ಮುಖ್ಯ ಆಡಳಿತಾಧಿಕಾರಿಗಳು / ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು.
4. ಸಂಬಂಧಪಟ್ಟ ಜಂಟಿ ನಿರ್ದೇಶಕರು/ ಅಧಿಕಾರಿಗೆ/ ಕಾಲೇಜಿಗೆ, (ಕಾಲೇಜು ಶಿಕ್ಷಣ ಆಯುಕ್ತಾಲಯದ ಮುಖಾಂತರ)
5. ಶಾಖಾ ರಕ್ಷಾ ಕಡತ. /ಹೆಚ್ಚುವರಿ ಪ್ರತಿಗಳು.

## 15/19 ಗಂಟೆಗಳ ಬೋಧನಾ ಅವಧಿಗೆ ನೇಮಕ ಮಾಡಿಕೊಂಡಿರುವ ವಿಷಯವಾರು ಅತಿಥಿ ಉಪನ್ಯಾಸಕರ ವಿವರ

| Sl. No. | Subject | 15/19 W/L |
|---|---|---|
| 1 | Arabic (Language) | 1 |
| 2 | Banking and Finance | 0 |
| 3 | Biochemistry | 5 |
| 4 | Biotechnology | 24 |
| 5 | Botany | 144 |
| 6 | Business Management | 335 |
| 7 | Chemistry | 488 |
| 8 | Commerce | 1385 |
| 9 | Computer Fundamentals | 57 |
| 10 | Computer Science | 521 |
| 11 | Criminology | 15 |
| 12 | Culture,Diversity and Society | 1 |
| 13 | Economics | 334 |
| 14 | Education | 5 |
| 15 | Electronics | 3 |
| 16 | English (Language) | 434 |
| 17 | Environment Science | 12 |
| 18 | Environmental Studies | 8 |
| 19 | Fashion Technology | 2 |
| 20 | Geography | 64 |
| 21 | Geology | 6 |
| 22 | Hindi (Language) | 47 |
| 23 | History | 347 |
| 24 | HOME SCIENCE | 15 |
| 25 | INDIAN CONSTITUTION | 2 |
| 26 | Industrial Chemistry | 3 |
| 27 | Journalism | 26 |

| Sl. No. | Subject | 15/19 W/L |
|---|---|---|
| 28 | Kannada (Language) | 625 |
| 29 | Law | 13 |
| 30 | Marathi (Language) | 0 |
| 31 | Mathematics | 342 |
| 32 | Microbiology | 22 |
| 33 | Music | 3 |
| 34 | Optional English | 14 |
| 35 | Optional Hindi | 0 |
| 36 | Optional Kannada | 66 |
| 37 | Optional Urdu | 1 |
| 38 | Physics | 392 |
| 39 | Political Science | 282 |
| 40 | Psychology | 17 |
| 41 | Public Administration | 5 |
| 42 | Sanskrit (Language) | 5 |
| 43 | Science and Society | 8 |
| 44 | Sericulture | 0 |
| 45 | Social Work | 58 |
| 46 | Sociology | 169 |
| 47 | Statistics | 6 |
| 48 | Telugu (Language) | 1 |
| 49 | Urdu (Language) | 20 |
| 50 | Women studies | 1 |
| 51 | Zoology | 135 |
| | **Grand Total** | **6469** |

11/02/2022

ಮುಖ್ಯ ಆಡಳಿತಾಧಿಕಾರಿಗಳು

ಕಾಲೇಜು ಶಿಕ್ಷಣ ಇಲಾಖೆ